# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 345

**ಮಾನ್ಯ ಸದಸ್ಯರ ಹೆಸರು** : ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ)

**ವಿಷಯ** : ಚಿಕ್ಕಮಗಳೂರು ಪ್ರವಾಸಿ ತಾಣಗಳ ಅಭಿವೃದ್ಧಿ ಕುರಿತು.

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

**ಉತ್ತರಿಸುವ ದಿನಾಂಕ:** : 06-03-2020.

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳ ತಾಲ್ಲೂಕುಗಳು ಯಾವುವು; ಈ ಪ್ರವಾಸಿ ತಾಣಗಳ ಅಭಿವೃದ್ಧಿಗೆ 3 ವರ್ಷಗಳಿಂದ ಸರ್ಕಾರ ಇಲ್ಲಿಯವರೆವಿಗೂ ವೆಚ್ಚ ಮಾಡಿರುವ ಹಣವೆಷ್ಟು; (ವಿವರ ನೀಡುವುದು) | ಚಿಕ್ಕಮಗಳೂರು, ತರೀಕೆರೆ, ಮೂಡಿಗೆರೆ, ಶೃಂಗೇರಿ, ಕಡೂರು ಮತ್ತು ಕೊಪ್ಪ ಇವು ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳ ತಾಲ್ಲೂಕುಗಳು.<br>ಸದರಿ ಪ್ರವಾಸಿ ತಾಣಗಳ ಅಭಿವೃದ್ಧಿಗೆ 3 ವರ್ಷಗಳಿಂದ ಸರ್ಕಾರ ಇಲ್ಲಿಯವರೆವಿಗೂ ವೆಚ್ಚ ಮಾಡಿರುವ ಅನುದಾನದ ವಿವರ ಈ ಕೆಳಗಿನಂತಿದೆ. |

| ಚಿಕ್ಕಮಗಳೂರು ಜಿಲ್ಲೆಯ ತಾಲ್ಲೂಕುಗಳು | ಬಿಡುಗಡೆ ಮಾಡಿರುವ ಅನುದಾನ (ರೂ.ಲಕ್ಷಗಳಲ್ಲಿ) | | |
|---|---|---|---|
| | 2017-18 | 2018-19 | 2019-20 |
| ಮೂಡಿಗೆರೆ | 20.00 | 92.00 | 407.75 |
| ಚಿಕ್ಕಮಗಳೂರು | 155.00 | 425.00 | 1863.00 |
| ತರೀಕೆರೆ | 70.00 | 88.00 | 120.00 |
| ಕಡೂರು | 52.75 | 45.00 | 653.00 |
| ಎನ್.ಆರ್.ಪುರ | 359.53 | 20.00 | 30.00 |
| ಶೃಂಗೇರಿ | 401.00 | 0.00 | 50.00 |
| **ಒಟ್ಟು :** | **1058.28** | **670.00** | **3123.75** |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಆ) | ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರು ತಂಗಲು ವಾಸ್ತವ್ಯದ ಅನಾನುಕೂಲತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರು ತಂಗಲು ವಾಸ್ತವ್ಯದ ಅನಾನುಕೂಲತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. ಆದ್ದರಿಂದ ಪ್ರವಾಸಿ ತಾಣಗಳಲ್ಲಿ ಯಾತ್ರಿ ನಿವಾಸ, ಡಾರ್ಮಿಟರಿ ನಿರ್ಮಾಣ ಮತ್ತು ಮೂಲಸೌಲಭ್ಯಗಳ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |
| ಇ) | ಕೇಂದ್ರ ಸರ್ಕಾರದಿಂದ ಯಾವ ಕಾರ್ಯಕ್ರಮಗಳಿಗೆ ಅನುದಾನ ನೀಡಲಾಗುತ್ತಿದೆ; (ವಿವರ ನೀಡುವುದು) | ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯದ ಪ್ರಸಾದ ಯೋಜನೆಯಡಿ ಮೈಸೂರಿನಲ್ಲಿರುವ ಚಾಮುಂಡೇಶ್ವರಿ ದೇವಸ್ಥಾನದ ಅಭಿವೃದ್ಧಿಗೆ ಹಾಗೂ ಸ್ವದೇಶಿ ದರ್ಶನ ಯೋಜನೆಯಡಿ ಚಿತ್ರದುರ್ಗ, ಶಿವಮೊಗ್ಗ, ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಪಾರಂಪರಿಕ ಪ್ರವಾಸಿ ತಾಣಗಳನ್ನು ಅಭಿವೃದ್ಧಿ ಪಡಿಸಲು ಹೇರಿಟೇಜ್ ಸರ್ಕ್ಯೂಟ್ ಪ್ರಸ್ತಾವನೆ ಸಲ್ಲಿಸಿದ್ದು, ಕೇಂದ್ರ ಸರ್ಕಾರದ ಅನುಮೋದನೆ ನೀಡಬೇಕಿದೆ. |

<table>
<tr>
<td>ಈ)</td>
<td>ಕಳೆದ 3 ವರ್ಷಗಳಲ್ಲಿ ಬಿಡುಗಡೆಯಾದ ಅನುದಾನ ಹಾಗೂ ಬಳಕೆಯಾದ ಅನುದಾನ ಎಷ್ಟು? (ವಿವರ ನೀಡುವುದು)</td>
<td>ಕಳೆದ 3 ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ಬಿಡುಗಡೆಯಾದ ಅನುದಾನ ಹಾಗೂ ಬಳಕೆಯಾದ ಅನುದಾನದ ವಿವರ ಈ ಕೆಳಗಿನಂತಿದೆ.<br>(ರೂ.ಲಕ್ಷಗಳಲ್ಲಿ)<br>
<table>
<tr><th>ವರ್ಷ</th><th>ಬಿಡುಗಡೆ ಮಾಡಿರುವ ಅನುದಾನ</th><th>ಬಳಕೆಯಾದ ಅನುದಾನ</th></tr>
<tr><td>2017-18</td><td>1058.28</td><td>1058.28</td></tr>
<tr><td>2018-19</td><td>670.00</td><td>670.00</td></tr>
<tr><td>2019-20</td><td>3123.75</td><td>3123.75</td></tr>
</table>
</td>
</tr>
</table>

ಕಡತ ಸಂಖ್ಯೆ: ಟಿಓಆರ್ 32 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.